## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 633
**ಸದಸ್ಯರ ಹೆಸರು** : ಡಾ: ತಳವಾರ ಸಾಬಣ್ಣ (ಶಿಕ್ಷಕರ ಕ್ಷೇತ್ರದಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : ದಿನಾಂಕ:21.02.2022
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪದವಿ ಹೊಂದಿರುವ ಪ್ರಾಥಮಿಕ ಶಾಲಾ ಶಿಕ್ಷಕರನ್ನು ಹಿರಿಯ ಪ್ರಾಥಮಿಕ ತರಗತಿಗೆ ಬೋಧಿಸಲು ಅರ್ಹತೆ ಹೊಂದಿದ್ದರೂ ಕಿರಿಯ ಪ್ರಾಥಮಿಕ ತರಗತಿಗಳಿಗೆ ಬೋಧಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ. | ಅವರು ಪಡೆದಿರುವ ಪದವಿಯನ್ನು ಕಡೆಗಣಿಸಿ ಸುಮಾರು 80000 ಶಿಕ್ಷಕರನ್ನು ಕಿರಿಯ ಪ್ರಾಥಮಿಕ ತರಗತಿಗೆ ಸೀಮಿತಗೊಳಿಸಿರುವುದು ನ್ಯಾಯವೇ; | ಪದವಿಯನ್ನು ಪಡೆದಿರುವ ಶಿಕ್ಷಕರನ್ನು ಕಡೆಗಣಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ. | ಹೆಚ್ಚಿನ ವಿದ್ಯಾರ್ಹತೆ ಹೊಂದಿದವರಿಗೆ ಮುಂಬಡ್ತಿ ನೀಡಿ ಅವರ ಸೇವೆ ಮತ್ತು ಅನುಭವವನ್ನು ಹಿರಿಯ ಪ್ರಾಥಮಿಕ ಶಾಲೆಗೆ ಬಳಸದಿರುವುದರಿಂದ ಸರ್ಕಾರಕ್ಕೆ ನಷ್ಟವಲ್ಲವೇ; | • ಸರ್ಕಾರದ ಅಧಿಸೂಚನೆ ಸಂಖ್ಯೆ ಇಡಿ 626 ಪಿಬಿಎಸ್ 2014 ದಿನಾಂಕ 07.08.2017 ರ ಪ್ರಕಾರ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಪದವೀಧರ (6 ರಿಂದ 8 ನೇ ತರಗತಿಗಳ) ಹುದ್ದೆಗಳ ನೇಮಕಾತಿಯಲ್ಲಿ, ನಿಯಮಗಳಂತೆ 1 ರಿಂದ 5 ನೇ ತರಗತಿಗಳ ವೃಂದದಿಂದ ಪದವೀಧರ ಪ್ರಾಥಮಿಕ ಶಿಕ್ಷಕರ 6 ರಿಂದ 8 ನೇ ತರಗತಿಗಳ ವೃಂದಕ್ಕೆ ಸೇವಾ ನಿರತರ ಕೋಟಾದಡಿ ಪರೀಕ್ಷೆ ಮುಖಾಂತರ ನೇಮಕಾತಿಗೆ ಅವಕಾಶ ಇರುತ್ತದೆ.<br>• ಇತ್ತೀಚಿನ ದಿನಾಂಕ 10.12.2021 ಸರ್ಕಾರದ ಅಧಿಸೂಚನೆ C&R ಪ್ರಕಾರ ನೇರ ನೇಮಕಾತಿ ಹಾಗೂ ಸೇವಾ ನಿರತರ ಶೇ 67 : 33 ರಂತೆ ಪರೀಕ್ಷೆ ಮುಖಾಂತರ ನೇಮಕಾತಿಗೆ ಅವಕಾಶ ಕಲ್ಪಿಸಲಾಗಿರುತ್ತದೆ. |
| ಈ. | ಪದವಿ ಹೊಂದಿದ ಪ್ರಾಥಮಿಕ ಶಿಕ್ಷಕರಿಗೆ C&R ನಲ್ಲಿ ಸೂಕ್ತ ತಿದ್ದುಪಡಿ ತಂದು ಸರ್ಕಾರವು ನ್ಯಾಯ ಒದಗಿಸಬಹುದೇ? | ಪದವಿ ಹೊಂದಿದ ಪ್ರಾಥಮಿಕ ಶಿಕ್ಷಕರಿಗೆ C&R ನಲ್ಲಿ ಸೂಕ್ತ ತಿದ್ದುಪಡಿ ತಂದು ನ್ಯಾಯ ಒದಗಿಸಲು ಪ್ರಯತ್ನಿಸಲಾಗುತ್ತಿದೆ. |

**ಸಂಖ್ಯೆ**: ಇಪಿ 07 ಪಿಎಂಎ 2021

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು